ದಲ್ಲಿ ಜಿಲ್ಲಾ ನ್ಯಾಯಾಲಯಗಳು, ಟ್ರಿಬ್ಯೂನಲ್‌ಗಳು ಮತ್ತು ಇನ್ನಿತರ ಕೆಳನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತವೆ. ನ್ಯಾಯದಾನ ಪದ್ಧತಿಯನ್ನು ಪ್ರಾಮುಖ್ಯವಾಗಿ ಎರಡು ವಿಧದಲ್ಲಿ ವಿಂಗಡಿಸಬಹುದಾಗಿದೆ.

## 1. ದೀವಾಣೀ ನ್ಯಾಯದಾನ ಪದ್ಧತಿ (Civil Judiciary System)

ಈ ನ್ಯಾಯದಾನ ಪದ್ಧತಿಯು ಕೆಳನ್ಯಾಯಾಲಯವಾಗಿ, ಮುನ್ಸಿಫ್ ಅಥವಾ ಕಿರಿಯ ದೀವಾಣೀ ನ್ಯಾಯಾಧೀಶನು ಕಾರ್ಯ ನಿರ್ವಹಿಸುತ್ತಾನೆ. ಈ ನ್ಯಾಯಾಲಯಕ್ಕೆ ಕೇವಲ ಮೂಲ ಪ್ರಾಧಿಕಾರವಿದೆ. ಈ ನ್ಯಾಯಾಲಯದ ನಿರ್ಣಯದ ಮೇಲೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ. ಮುನ್ಸಿಫ್‌ರಿಗೆ ಹಣಕಾಸಿನ ಸೀಮಿತ ಪ್ರಾಧಿಕಾರವಿರುತ್ತದೆ. ಅವರ ನಿರ್ಣಯಕ್ಕೆ ಮಂಡಿಸಲಾದ ವ್ಯಾಜ್ಯದಲ್ಲಿ ಅವರ ಪ್ರಾಧಿಕಾರವನ್ನು ಮೀರಿದ ಮೊತ್ತವಾಗಿದ್ದರೆ ಅವರು ನಿರ್ಣಯಕ್ಕಾಗಿ ಅಂಗೀಕರಿಸಲಿಕ್ಕಾಗದು. ಅಂಥಹ ವ್ಯಾಜ್ಯಕುರಿತು ಜಿಲ್ಲಾ ನ್ಯಾಯಾಲಯಕ್ಕೆ ಮೂಲ ಪ್ರಾಧಿಕಾರವಿರುತ್ತದೆ. ಅಂತೆಯೇ, ಜಿಲ್ಲಾ ನ್ಯಾಯಾಲಯವು ಮೂಲ ಮತ್ತು ಮೇಲ್ಮನವಿ ಪ್ರಾಧಿಕಾರವನ್ನು ಹೊಂದಿರುತ್ತದೆ. ಜಿಲ್ಲಾ ನ್ಯಾಯಾಲಯದ ನಿರ್ಣಯದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು ಅವಕಾಶವಿದೆ. ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಪ್ರಾಧಿಕಾರ ಮತ್ತು ಇನ್ನುಳಿದ ಕೆಳ ನ್ಯಾಯಾಲಯದ ಮೇಲೆ ಮೇಲ್ವಿಚಾರಣಾ ಪ್ರಾಧಿಕಾರವನ್ನೂ ಹೊಂದಿರುತ್ತದೆ. ಮುಂಬಯಿ, ಮದ್ರಾಸ ಮತ್ತು ಕಲಕತ್ತಾ ಉಚ್ಚ ನ್ಯಾಯಾಲಯಗಳನ್ನು ಹೊರತುಪಡಿಸಿ ಇನ್ನುಳಿದ ಯಾವ ನ್ಯಾಯಾಲಯವೂ ರಿಟ್ ಒಂದನ್ನು ಬಿಟ್ಟು ಮೂಲ ಪ್ರಾಧಿಕಾರವನ್ನು ಹೊಂದಿಲ್ಲ.

## (ii) ಕ್ರಿಮಿನಲ್ ನ್ಯಾಯದಾನ ಪದ್ಧತಿ (Criminal Judicial System)

ಕ್ರಿಮಿನಲ್ ನ್ಯಾಯದಾನಕ್ಕಾಗಿ ಕ್ರಿಮಿನಲ್ ನ್ಯಾಯಾಲಯಗಳನ್ನು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಗನುಗುಣವಾಗಿ ಸ್ಥಾಪಿಸಲಾಗಿದೆ. ಅತ್ಯಂತ ಕೆಳನ್ಯಾಯಾಲಯವಾಗಿ ಮ್ಯಾಜಿಸ್ಟ್ರೇಟ (ಮೊದಲನೇಯ, ಎರಡನೇಯ ಮತ್ತು ಮೂರನೇಯ) ನ್ಯಾಯಾಲಯವು ಕಾರ್ಯನಿರ್ವಹಿಸುತ್ತಿದ್ದು ಅವರಿಗೆ ಕೆಲವೊಂದು ಸೀಮಿತ ಪ್ರಕರಣಗಳನ್ನು ಮಾತ್ರ ವಿಚಾರಿಸುವ ಅಧಿಕಾರವಿದೆ. ಅತ್ಯಂತ ಹೀನಾಯ ಪ್ರಕರಣಗಳಾದ ಕೊಲೆ, ಸುಲಿಗೆ ಇತ್ಯಾದಿಗಳ ವಿಚಾರಣೆಗಾಗಿ ಅವರ ಮುಂದೆ ಬಂದಲ್ಲಿ ಅವರು ಪ್ರಾಥಮಿಕ ವಿಚಾರಣೆಯನ್ನು ಮಾತ್ರ ಮಾಡಿ ಅದನ್ನು ಸೆಶೆನ್ಸ್ ನ್ಯಾಯಾಲಯಕ್ಕೆ ಕಳಿಸಿಕೊಡುತ್ತಾರೆ. ಸೆಶೆನ್ಸ್ ನ್ಯಾಯಾಲಯದ ನಿರ್ಣಯದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ.

ಉಚ್ಚ ನ್ಯಾಯಾಲಯಗಳ ನಿರ್ಣಯದ ಮೇಲೆ, ದೀವಾಣೀ ಮತ್ತು ಕ್ರಿಮಿನಲ್ ಪ್ರಕರಣಗಳ ಮೇಲ್ಮನವಿಯು ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸ

ಲ್ಪಡುವುದು. ಸರ್ವೋಚ್ಚ ನ್ಯಾಯಾಲಯವು ದೀವಾಣೀ ಪ್ರಕರಣದ ಮೇಲ್ಮನವಿ ವಿಚಾರಣೆಯಲ್ಲಿ ದೀವಾಣೀ ನ್ಯಾಯಾಲಯದಂತೆಯೂ, ಕ್ರಿಮಿನಲ್ ಪ್ರಕರಣದ ಮೇಲ್ಮನವಿಯ ವಿಚಾರಣೆಯಲ್ಲಿ ಕ್ರಿಮಿನಲ್ ನ್ಯಾಯಾಲಯದಂತೆಯೂ ಕಾರ್ಯ ನಿರ್ವಹಿಸುವುದು.



Ind.Leg.Hist. I 880806 **Rs. 12-00**